# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 347

ಸದಸ್ಯರ ಹೆಸರು : ಶ್ರೀ ಮಾನೆ ಶ್ರೀನಿವಾಸ್
(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸಬೇಕಾದ ಸಚಿವರು : ಮಾನ್ಯ ಉಪ ಮುಖ್ಯ ಮಂತ್ರಿಗಳು
ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 10-12-2020

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್-19 ಸಾಂಕ್ರಾಮಿಕ ರೋಗ ಹರಡಿ ಲಾಕ್‌ಡೌನ್ ಘೋಷಣೆಗೊಂಡ ಸಮಯದಲ್ಲಿ, ದುಡಿಮೆಯಿಲ್ಲದೇ ಸಂಕಷ್ಟಕ್ಕೆ ಸಿಲುಕಿದ್ದ, ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನು ಮುಂತಾದ ಶ್ರಮಿಕ ವರ್ಗದವರಿಗೆ ರಾಜ್ಯ ಸರ್ಕಾರದಿಂದ ಸಹಾಯಧನವನ್ನು ಘೋಷಣೆ ಮಾಡಲಾಗಿದ್ದು, ಸದರಿ ಘೋಷಣೆಯ ಪ್ರಕಾರ ಗದಗ, ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು ಎಷ್ಟು ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರು ನೊಂದಾಯಿತರಾಗಿದ್ದಾರೆ ಅಲ್ಲದೇ ಎಷ್ಟು ಘೋಷಿತ ಶ್ರಮಿಕ ವರ್ಗದವರಿಗೆ ಸಹಾಯಧನವನ್ನು ನೀಡಲಾಗಿದೆ; | **ಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ**<br><br>ಕೋವಿಡ್-19 ಸಾಂಕ್ರಾಮಿಕ ರೋಗ ಹರಡಿ ಲಾಕ್‌ಡೌನ್ ಘೋಷಣೆಗೊಂಡ ಸಮಯದಲ್ಲಿ ದುಡಿಮೆಯಿಲ್ಲದೇ ಸಂಕಷ್ಟಕ್ಕೆ ಸಿಲುಕಿದ್ದ ಟ್ಯಾಕ್ಸಿ ಚಾಲಕರು ಮತ್ತು ಆಟೋರಿಕ್ಷಾ ಚಾಲಕರುಗಳು ಸೇರಿದಂತೆ ರಾಜ್ಯ ಸರ್ಕಾರದಿಂದ ಘೋಷಣೆ ಮಾಡಿರುವ ಕೋವಿಡ್-19ರ ಪರಿಹಾರ ಧನ ನೀಡುವಂತೆ ಕೋರಿ ಗದಗ, ಧಾರವಾಡ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು 6572 ಅರ್ಜಿಗಳನ್ನು ಸ್ವೀಕೃತವಾಗಿದ್ದು, ಒಟ್ಟು 5715 ಅರ್ಜಿಗಳಿಗೆ ಕೋವಿಡ್-19ರ ಪರಿಹಾರ ಧನವನ್ನು ವಿತರಣೆ ಮಾಡಲಾಗಿರುತ್ತದೆ.<br><br>**ಕಾರ್ಮಿಕ ಇಲಾಖೆಗೆ ಸಂಬಂಧಿಸಿದಂತೆ**<br><br>ಕೋವಿಡ್-19 ಸಾಂಕ್ರಾಮಿಕ ರೋಗದ ಪರಿಣಾಮವಾಗಿ ಸಂಕಷ್ಟಕ್ಕೊಳಗಾದ ವಿವಿಧ ವರ್ಗದ ಕಾರ್ಮಿಕರಿಗೆ ಸನ್ಮಾನ್ಯ ಮುಖ್ಯಮಂತ್ರಿಯವರು ಪರಿಹಾರವನ್ನು ಘೋಷಿಸಿದ್ದು, ಅವುಗಳಲ್ಲಿ ಅಗಸ ಹಾಗೂ ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರುಗಳಿಗೆ ತಲಾ ರೂ.5,000/-ಗಳ ಒಂದು ಬಾರಿಯ ನೆರವನ್ನು ಮಾತ್ರ ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಯ ಮೂಲಕ ಜಾರಿಗೊಳಿಸಲಾಗುತ್ತಿದೆ.<br><br>ಸದರಿ ಪರಿಹಾರಕ್ಕಾಗಿ ಅರ್ಜಿ ಸಲ್ಲಿಸಲು ನಿಗದಿತ ಅಂತಿಮ ದಿನಾಂಕ:15-08-2020 ರವರೆಗೆ ಗದಗ, ಧಾರವಾಡ ಮತ್ತು ಹಾವೇರಿ ಜಿಲ್ಲೆಯಲ್ಲಿ ಅಗಸ ವೃತ್ತಿ ನಿರ್ವಹಿಸುತ್ತಿರುವ 5812 ಮತ್ತು ಕ್ಷೌರಿಕ ವೃತ್ತಿ ನಿರ್ವಹಿಸುತ್ತಿರುವ 6456 ಅರ್ಜಿದಾರರು ಸೇರಿದಂತೆ ಒಟ್ಟು 12268 ಅರ್ಜಿಗಳನ್ನು ಸ್ವೀಕರಿಸಲಾಗಿದೆ.<br><br>ಅವರಲ್ಲಿ 5089 ಅಗಸ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರಿಗೆ ರೂ.2.54 ಕೋಟಿ ಹಾಗೂ 5207 ಕ್ಷೌರಿಕ ವೃತ್ತಿಯಲ್ಲಿ ತೊಡಗಿರುವ ಕಾರ್ಮಿಕರುಗಳಿಗೆ ರೂ.2.60 ಕೋಟಿ ಸೇರಿದಂತೆ, ಒಟ್ಟು 10296 ಅರ್ಜಿದಾರರಿಗೆ ತಲಾ ರೂ.5,000/-ಗಳಂತೆ ಒಟ್ಟು ರೂ.5.14 ಕೋಟಿ ಮೊತ್ತವನ್ನು ಅವರವರ ಬ್ಯಾಂಕ್ ಖಾತೆಗೆ ಡಿ.ಬಿ.ಟಿ ಮೂಲಕ ವರ್ಗಾಯಿಸಲಾಗಿದೆ.<br><br>ಉಳಿದಂತೆ, ಯಾವುದೇ ಅಸಂಘಟಿತ ವರ್ಗಗಳ ಕಾರ್ಮಿಕರಿಗೆ ಸದರಿ ಸೌಲಭ್ಯವನ್ನು ಮಂಡಳಿಯ ಮೂಲಕ ನೀಡಿರುವುದಿಲ್ಲ. |

--2

| | | |
|---|---|---|
| (ಆ) | ಧಾರವಾಡ, ಗದಗ ಹಾಗೂ ಹಾವೇರಿ ಜಿಲ್ಲೆಯಲ್ಲಿ ಒಟ್ಟು ಎಷ್ಟು ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರಿಗೆ ಸಹಾಯಧನ ನೀಡುವುದು ಬಾಕಿಯಿದೆ; ಬಾಕಿ ಉಳಿಯಲು ಕಾರಣಗಳೇನು; | **ಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ**<br>ಧಾರವಾಡ, ಗದಗ ಹಾಗೂ ಹಾವೇರಿ ಜಿಲ್ಲೆಯಲ್ಲಿ ಒಟ್ಟು 857 ಟ್ಯಾಕ್ಸಿ ಚಾಲಕರು ಮತ್ತು ಆಟೋ ಚಾಲಕರ ಅರ್ಜಿಗಳು ಬಾಕಿ ಇರುತ್ತವೆ.<br>I.D validation failed ತಾಂತ್ರಿಕ ಸಮಸ್ಯೆಯಿಂದ/ ಫಲಾನುಭವಿಗಳ ಬ್ಯಾಂಕ್ ಖಾತೆಗಳು inactive ಆಗಿರುವ ಕಾರಣ/ ಬ್ಯಾಂಕ್ ಖಾತೆಗಳಿಗೆ ಆಧಾರ್ ಸಂಖ್ಯೆ ಜೋಡಣೆ ಆಗದಿರುವ ಕಾರಣ ನಿಯಮಾವಳಿಯಂತೆ ಪರಿಹಾರ ಧನವನ್ನು ಕೋರಿ ಅರ್ಜಿ ಸಲ್ಲಿಸಿದವರಿಗೆ ಡಿ.ಬಿ.ಟಿ. ಮುಖಾಂತರ ನೇರವಾಗಿ ಜಮೆ ಮಾಡಲು ಸಾಧ್ಯವಾಗಿರುವುದಿಲ್ಲ. ಪರಿಹಾರ ಧನ ಕೋರಿರುವ ನೋಂದಾಯಿತ ಬಾಕಿ ಉಳಿದಿರುವ ಆಟೋರಿಕ್ಷಾ, ಟ್ಯಾಕ್ಸಿ ಚಾಲಕರಿಗೆ ಪರಿಹಾರ ಧನ ವಿತರಿಸುವ ಬಗ್ಗೆ ತಾಂತ್ರಿಕ ನ್ಯೂನತೆಗಳನ್ನು ಸರಿಪಡಿಸಲಾಗಿದ್ದು ಪರಿಹಾರ ಧನವನ್ನು ವಿತರಿಸಲು ಕ್ರಮ ಕೈಗೊಳ್ಳಲಾಗಿದೆ.<br><br>**ಕಾರ್ಮಿಕ ಇಲಾಖೆಗೆ ಸಂಬಂಧಿಸಿದಂತೆ**<br>ಪರಿಹಾರ ನೀಡುವ ಸಂಬಂಧ ಸರ್ಕಾರದಿಂದ ಹೊರಡಿಸಲಾದ ಮಾರ್ಗಸೂಚಿಯನ್ವಯ ಷರತ್ತುಗಳನ್ನು ಪೂರೈಸದ ಹಿನ್ನೆಲೆಯಲ್ಲಿ ಪರಿಹಾರ ಪಾವತಿಸದೆ ಬಾಕಿ ಉಳಿದ ಒಟ್ಟು 1972 ಅರ್ಜಿಗಳ ಪೈಕಿ ಕೆಲವು ಅರ್ಜಿಗಳಲ್ಲಿ ಬಿಪಿಎಲ್ ಕಾರ್ಡ್ ಸಂಖ್ಯೆ ಲಭ್ಯವಿರುವುದಿಲ್ಲ, ಕೆಲವು ಒಂದೇ ಕುಟುಂಬದ ಒಂದಕ್ಕಿಂತ ಹೆಚ್ಚು ಅರ್ಜಿದಾರರು ಅರ್ಜಿ ಸಲ್ಲಿಸಿದ್ದು, ಕೆಲವು ಅರ್ಜಿದಾರರ ಆಧಾರ್ ಸಂಖ್ಯೆಯು ಬ್ಯಾಂಕ್ ಖಾತೆಗೆ ಜೋಡಣೆಯಾಗಿರುವುದಿಲ್ಲ ಅಥವಾ ಬ್ಯಾಂಕ್ ಖಾತೆ ಊರ್ಜಿತದಲ್ಲಿರುವುದಿಲ್ಲ. ಇಂತಹ ಅರ್ಜಿಗಳನ್ನು ಪುನಃ ಪರಿಶೀಲಿಸಲಾಗುತ್ತಿದೆ. ಅದರಲ್ಲಿ 1198 ಅರ್ಜಿಗಳನ್ನು ಪುನಃ ಪರಿಶೀಲಿಸಲಾಗುತ್ತಿದೆ. ಬಾಕಿ ಉಳಿದ 774 ಅರ್ಜಿಗಳನ್ನು ತಿರಸ್ಕರಿಸಲಾಗಿದೆ. |
| (ಇ) | ಎಲ್ಲಾ ನೋಂದಾಯಿತ ಟ್ಯಾಕ್ಸಿ ಚಾಲಕರು, ಆಟೋ ಚಾಲಕರು, ಕ್ಷೌರಿಕರು ಹಾಗೂ ಇನ್ನುಳಿದ ಘೋಷಿತ ಶ್ರಮಿಕ ವರ್ಗದವರಿಗೆ ಸಹಾಯಧನವನ್ನು ಬಿಡುಗಡೆಗೊಳಿಸಲಾಗುವುದು ಯಾವಾಗ? | **ಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ**<br>ಆಟೋರಿಕ್ಷಾ / ಟ್ಯಾಕ್ಸಿ ಚಾಲಕರ ಪರಿಹಾರ ಧನ ಕೋರಿ ಸಲ್ಲಿಸಿರುವ ಅರ್ಜಿಗಳಲ್ಲಿ ತಂತ್ರಾಂಶದಲ್ಲಿ ಬ್ಯಾಂಕ್ ಖಾತೆಯು ಆಧಾರ್ ಸಂಖ್ಯೆಗೆ ಜೋಡಣೆಯಾಗದ ಕಾರಣ ಅಥವಾ ಜೋಡಣೆಯಾಗಿರುವ ಬ್ಯಾಂಕ್ ಖಾತೆಯು ಚಾಲ್ತಿಯಲ್ಲಿರದ ಕಾರಣ ಪರಿಹಾರ ಧನ ವಿತರಿಸುವ ಸಂಬಂಧ ಹೆಚ್ಚುವರಿ ಬ್ಯಾಂಕ್ ಖಾತೆಯ ಮಾಹಿತಿಗಳನ್ನು ದಿನಾಂಕ:25-11-2020 ರೊಳಗಾಗಿ ಸೇವಾ ಸಿಂಧು ವೆಬ್ ಪೋರ್ಟಲ್‌ನಲ್ಲಿ ದಾಖಲಿಸಲು ಬಾಕಿ ಅರ್ಹ ಫಲಾನುಭವಿಗಳ ಮೊಬೈಲ್ ಸಂಖ್ಯೆಗೆ ಎಸ್.ಎಂ.ಎಸ್. ಮುಖಾಂತರ ಮಾಹಿತಿಯನ್ನು ನೀಡಲಾಗಿರುತ್ತದೆ. ಅದಕ್ಕನುಗುಣವಾಗಿ ಸ್ವೀಕೃತವಾಗಿರುವ ಮಾಹಿತಿಯನ್ನು ಪರಿಶೀಲಿಸಿ ಪರಿಹಾರಧನ ವಿತರಿಸುವ ಕ್ರಮ ಚಾಲ್ತಿಯಲ್ಲಿರುತ್ತದೆ.<br><br>**ಕಾರ್ಮಿಕ ಇಲಾಖೆಗೆ ಸಂಬಂಧಿಸಿದಂತೆ**<br>ಪರಿಶೀಲನೆಗೆ ಬಾಕಿ ಇರುವ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ ಅರ್ಹ ಕಾರ್ಮಿಕರಿಗೆ ಘೋಷಿತ ನೆರವನ್ನು ಬಿಡುಗಡೆಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |

ಟಿಡಿ 115 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು.